ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಬೆಂಗಳೂರು ನಗರದ ಸಿಗ್ನಲ್‌ಗಳಲ್ಲಿ ನ ಸಿ.ಸಿ.ಟಿ.ವಿ. ಕ್ಯಾಮರಾಗಳ ದುಸ್ಥಿತಿ ಸರಿಪಡಿಸುವ ಕುರಿತು

ಶ್ರೀ ಕೆ.ಗೋವಿಂದರಾಜ್(ವಿಧಾನ ಸಭೆಯಿಂದ ಚುನಾಯಿತರಾದವರು):-

1313 (1498) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ನಗರದ ಯಾವ ಯಾವ ರಸ್ತೆಗಳು ಮತ್ತು ಸಿಗ್ನಲ್‌ಗಳಲ್ಲಿ ಸುರಕ್ಷತಾ ದೃಷ್ಟಿಯಿಂದ ಸಿ.ಸಿ.ಟಿ.ವಿ.ಗಳನ್ನು ಅಳವಡಿಸಲಾಗಿದೆ;

(ಆ) ಕಳೆದ ಮೂರು ವರ್ಷಗಳ ಅವಧಿಯಲ್ಲಿ ಅಳವಡಿಸಲಾಗಿರುವ ಸಿ.ಸಿ.ಟಿ.ವಿ. ಗಳಿಗೆ ವಿನಿಯೋಗಿಸಲಾದ ಮತ್ತು ನಿರ್ವಹಣೆಗೆ ಬಳಸಲಾದ ಅನುದಾನ ಎಷ್ಟು; (ಪ್ರತ್ಯೇಕ ಮಾಹಿತಿ ಒದಗಿಸುವುದು)

(ಇ) ಕಳಪೆ ನಿರ್ವಹಣೆಯಿಂದಾಗಿ ಅಳವಡಿಸಲಾದ ಸಿ.ಸಿ.ಟಿ.ವಿ.ಗಳು ಕಾರ್ಯನಿರ್ವಹಿಸದೇ, ನಿರುಪಯುಕ್ತವಾಗಿರುವ ಕುರಿತು ಸರ್ಕಾರ ಗಂಭೀರವಾಗಿ ಆಲೋಚಿಸಿದೆಯೇ; ಹಾಗಿದ್ದಲ್ಲಿ ಈ ನಿಟ್ಟಿನಲ್ಲಿ ಕೈಗೊಂಡ ಕ್ರಮಗಳೇನು ? (ಮಾಹಿತಿ ಒದಗಿಸುವುದು)